# 153

# ಭಾರತದ
# ವೀರ ನಾರಿಯರು

(ಐತಿಹಾಸಿಕ)



ಕತೆಗಳು:—೧. ವೀರ ಆಯಾ. ೨. ರಾಣಿ ರಾಜಬಾಯಿ. ೩. ವೀರಕನ್ಯೆ ವಿದ್ಯುಲ್ಲತಾ. ೪. ಸತೀ ಜಸವಾ. ೫. ವೀರಾಂಗನಾ ಹಾಡೀ ರಾಣಿ. ೬. ವೀರಾಂಗನಾ ವೀರಾ. ೭. ಜವಾಹರಬಾಯಿ.

**1957.**




ಒಂದಾಣೆ ಮಾಲೆ

# ಇಪ್ಪತ್ತೊಂಭತ್ತು ಏಕಾಂಕ ನಾಟಕಗಳು.

(ಕೆಲವು 16+4 ಪುಟಗಳು; ಮತ್ತೆ ಕೆಲವು 20+4 ಪುಟಗಳು)

'ಒಂದಾಣೆ ಮಾಲೆ'ಯಲ್ಲಿ ಪ್ರಕಟವಾದ ಮೂವತ್ತು ಏಕಾಂಕ ನಾಟಕಗಳಲ್ಲಿ ಈ ಕೆಳಗಿನವು(ಇಪ್ಪತ್ತೊಂಭತ್ತು) ದೊರೆವವು

| | | |
|---|---|---|
| ೧ | ನಾರೀಶ್ವರರು (ಪ್ರಹಸನ) | ಕುಡ್ಪಿ ವಾಸುದೇವ ಶೆಣೈ. |
| ೨ | ಬಾಬಿಗೆ ಬಾಸಿಂಗ ,, | ,, ,, ,, |
| ೩ | ಸತ್ಯವಂತ ಬಾಬಿ ,, | ,, ,, ,, |
| ೪ | ಮರ್ಜಿ ,, | ಡಾ। ಎಮ್. ಎನ್. ಕಾಮತ್. |
| ೫ | ಸತೀ ಸಾವಿತ್ರಿ (ಪೌರಾಣಿಕ) | ಶ್ರೀ। ಪಿ ವೆಂಕಟ್ರಮಣ ಭಟ್ಟ. |
| ೬ | ಅಕಾಂಡ ತಾಂಡವ (ರೇಡಿಯೊ ನಾಟಕ) | ಶ್ರೀ। ಬಿ. ದಾಮೋದರ ಬಾಳಿಗ, ಬಿ ಎ |
| ೭ | ವೀರಬಾಯಿ (ಐತಿಹಾಸಿಕ) | ಶ್ರೀ। ಸಂ. ಜ. ರಾವ್. |
| ೮ | ಚುಟ್ಟಿ ಬಿಟ್ಟಿ ದಿಟ್ಟಿ (ಪ್ರಹಸನ) | ಡಾ। ಎಸ್. ಪಿ ಭಟ್. |
| ೯ | ಜರಾಸಂಧ ವಧೆ (ಪೌರಾಣಿಕ) | ಶ್ರೀ। ಎ. ವಿ. ಮಯ್ಯ. |
| ೧೦ | ಸತ್ಯಹರಿಶ್ಚಂದ್ರ (ಪೌರಾಣಿಕ) | ಶ್ರೀ। ಪಿ. ವೆಂಕಟ್ರಮಣ ಭಟ್ಟ. |
| ೧೧ | ಮಾಯಾಮೃಗ ( ,, ) | ಶ್ರೀ। ಎ. ವಿ. ಮಯ್ಯ. |
| ೧೨ | ಸತೀವೃಂದಾ ( ,, ) | ಶ್ರೀ। ಕೆ. ಸುಭಾಷಚಂದ್ರ ಶೆಣೈ. |
| ೧೩ | ಗೌತಮನ ಗೃಹತ್ಯಾಗ, ಸಿದ್ಧಾರ್ಥನ ಕಾರುಣ್ಯ | ಶ್ರೀ। ಎಲ್. ಎಸ್. ನಾಯ[illegible] |
| ೧೪ | ಪುನರುಜ್ಜೀವನ (ಸಾಮಾಜಿಕ) | ಶ್ರೀ। ಗೋವಿಂದ ಭಟ್ಟ. |
| ೧೫ | ಸ್ವಾತಂತ್ರ್ಯ ( ,, ) | ಶ್ರೀ। ಕೆ. ಎನ್. ಭಟ್, ಶಿರಾಡಿಪಾಲ್. |
| ೧೬ | ಭಕ್ತಕುಚೇಲ (ಪೌರಾಣಿಕ) | ಶ್ರೀ। ಅಂಬಾತನಯ. |
| ೧೭ | ಮುದ್ದೆ ಅವಾಂತರ (ಪ್ರಹಸನ) | ಅಷ್ಟಾವಕ್ರ. |
| ೧೮ | ಗ್ರಾಮಸ್ವಾತಂತ್ರ್ಯ ,, | ಶ್ರೀ। ಎ. ವಿ. ಮಯ್ಯ. |
| ೧೯ | ಭಕ್ತ ಧ್ರುವ (ಪೌರಾಣಿಕ) | ಶ್ರೀ। ಸುಬ್ರಾಯ. |
| ೨೦ | ಬೇಡನ ಮಗಳು ,, | ಶ್ರೀ। ವೆಂಕಟರಾಜ ಪುಣಿಂಚತ್ತಾಯ. |
| ೨೧ | ಪುರಂದರದಾಸರು (ಐತಿಹಾಸಿಕ) | ಬಿ. ಪದ್ಮನಾಭ ಸೋಮಯಾಜಿ. |
| ೨೨ | ವೀರಾಗ್ರಣಿ ಕರ್ಣ (ಪೌರಾಣಿಕ) | ಶ್ರೀ। ಅಮ್ಮೆಂಬಳ ಅನಂತಯ್ಯ ನಾವಡ. |
| ೨೩ | ಕುಶ-ಲವ ,, | ಶ್ರೀ। ಬಿ. ಈಶ್ವರಯ್ಯ. |
| ೨೪ | ಅಕ್ಷಯಪಾತ್ರೆ (ಸಾಮಾಜಿಕ) | ಶ್ರೀ। ಟಿ. ಚಂದ್ರರಾಜ ಸೆಟ್ಟಿ |
| ೨೫ | ವೈರಾಗ್ಯನಿಧಿ (ತರಂಗರೂಪಕ) | ಶ್ರೀ। ಕೆ. ಎಸ್. ಶರ್ಮ, ವಿದ್ವಾನ್. |
| ೨೬ | ಭರತನ ಬಂಧುಪ್ರೇಮ (ಪೌರಾಣಿಕ) | ಶ್ರೀ। ಅಮ್ಮೆಂಬಳ ಅನಂತಯ್ಯ ನಾವಡ. |
| ೨೭. | ಮಹಾತ್ಮಾ ಉದಂಕ | ಶ್ರೀ। ಮಣೆಲ 'ಶಿವಶಂಕರ', ಪುಣಚಾ |
| ೨೮. | ಭಕ್ತ ಪ್ರಹ್ಲಾದ (ಪೌರಾಣಿಕ) | ಶ್ರೀ। ಎ. ವಿ. ಮಯ್ಯ. |
| ೨೯. | ಅಭಿಮನ್ಯು ,, | ಶ್ರೀ। ಬಿ. ಈಶ್ವರಯ್ಯ. |

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು.

# ಭಾರತದ ನಾರೀಮಣಿಗಳು

▪▪▪▪▪▪▪▪▪

## ೧. ವೀರ ಆಯಾ

ಕರ್ತವ್ಯ ಮತ್ತು ಸ್ವಾಮಿನಿಷ್ಠೆ ಇವುಗಳ ಉದಾಹರಣೆಗಳು ಭಾರತೀಯರ ಇತಿಹಾಸದಲ್ಲಿ ಧಾರಾಳ ದೊರೆಯುವುವು. ಇಲ್ಲಿ ನಾವು, ಯಾವ 'ಆಯಾ' (ದಾದಿ) ವಿಷಯದಲ್ಲಿ ಈ ಕೆಲವು ಪಂಕ್ತಿಗಳನ್ನು ಬರೆಯುತ್ತೇವೆಯೋ ಅವಳು ವಿದೇಶೀಯರ ಪ್ರಾಣ ರಕ್ಷಿಸುವುದರ ಮೂಲಕ ತನ್ನ ಕರ್ತವ್ಯ, ಕರ್ಮ, ನಿಷ್ಠೆಗಳನ್ನು ಪ್ರದರ್ಶಿಸಿದ ವೀರ ರಮಣಿ: ಇಲ್ಲ, ಆಕೆ ಮಾನವೀಯತೆಯನ್ನು ಪ್ರದರ್ಶಿಸಿದಳೆಂದೇ ಅವಳ ಚರಿತ್ರವು ಭಾರತ ಇತಿಹಾಸದಲ್ಲಿ ದಾಖಲಾಗಿದೆ. ಈ ವೀರರಮಣಿಯು ಕಾನ್ಪುರದ ಒಬ್ಬ ಇಂಗ್ಲಿಷ್ ಸರದಾರನಲ್ಲಿ ಕೆಲಸಕ್ಕಿದ್ದಳು.

ಕ್ರಿ. ಶ. ೧೮೫೭ನೇ ಇಸವಿ; ಸಿಪಾಯಿ ದಂಗೆಯ ದಿನಗಳು. ದೇಶದಲ್ಲಿ ಬ್ರಿಟಿಷರ ವಿರುದ್ಧ ದಂಗೆಯೆದ್ದು, ಉಜ್ವಲತೆ ತಾಳಿತು. ಆ ಜ್ವಾಲೆಯು ಕಾನ್ಪುರಕ್ಕೂ ಹಬ್ಬಿತ್ತು. ಭಾರತೀಯರು ಇಂಗ್ಲಿಷರ ವ್ಯವಹಾರದಿಂದ ವಿಕಲರಾಗಿದ್ದರು. ಅವರ ಸಹನಶೀಲತೆಯು ಪರಾಕಾಷ್ಠೆಗೆ ಮುಟ್ಟಿತ್ತು. ಅವರ (ಭಾರತೀಯರ) ಬುದ್ಧಿಯು ಅವರ ವಶದಲ್ಲಿರಲಿಲ್ಲ. ಅವರು ಒಬ್ಬೊಬ್ಬ ಆಂಗ್ಲೇಯನನ್ನು ಕೂಡ ಹುಡುಕಿ ಹುಡುಕಿ ಎತ್ತಿ, ಯಮಸದನಕ್ಕೆ ಅಟ್ಟುತಿದ್ದರು. ಬಿಳಿಯರೆಲ್ಲರೂ ಭಾರತದಿಂದ ಪೂರ್ಣ ಉಚ್ಚಾಟನವಾಗಬೇಕೆಂದೇ, ಕ್ರಾಂತಿಯೆದ್ದವರ ದೀಕ್ಷೆಯಾಗಿತ್ತು. ಆಂಗ್ಲೇಯರು ತಮ್ಮ ಪ್ರಾಣಗಳನ್ನು ರಕ್ಷಿಸಿಕೊಳ್ಳುವುದು ಕಷ್ಟತರವಾದಂತಿತ್ತು. ಬದುಕಿಕೊಳ್ಳಲು ಯಾವ ಉಪಾಯವೂ ಹೊಳೆಯುತ್ತಿರಲಿಲ್ಲ ಎನ್ನುವಂತಹ ಕಠಿನ ಪ್ರಸಂಗವು ಒದಗಿತ್ತು.

ಆಗತಾನೆ ಕಾನಪುರವು ಭಾರತೀಯರ ವಶಕ್ಕೆ ಬಂತು. "ನೀವು ನಮ್ಮ ಜನರಿಗೆ ಸುರಕ್ಷಿತವಾಗಿ ಹೋಗಗೊಡಿರಿ!" ಎಂಬುದಾಗಿ ಇಂಗ್ಲಿಷ್ ಸರದಾರನು ಭಾರತೀಯರಲ್ಲಿ ವಿನಂತಿಮಾಡಿದನು. ಅನುರೋಧವು ಸ್ವೀಕೃತವಾಯಿತು. ಇಂಗ್ಲಿಷರು ಮಕ್ಕಳ ಸಹಿತ ದೋಣಿಗಳಿಗೆ ಬಂದರು.

ಆದರೆ, ಆಂಗ್ಲೇಯರ ದರ್ಪ, ಕ್ರೌರ್ಯ, ಧರ್ಮವಿರುದ್ಧ ಕೃತ್ಯಗಳಿಂದ ಸೇಡಿಗಾಗಿ ತೃಷಿಸುತಿದ್ದ ಅನೇಕ ಭಾರತೀಯರು ಶಸ್ತ್ರಾಸ್ತ್ರಗಳಿಂದ ಸುಸಜ್ಜಿತ ರಾಗಿ ನದಿಕಿನಾರೆಗೆ ತಲಪಿದರು. ಅಲ್ಲಿ ಡೋಣಿಗಳಿಗೆ ಹತ್ತುತಿದ್ದ ಇಂಗ್ಲಿಷರ ಮೇಲೆ ಗೋಳೀಬಾರು ಮಾಡಿದರು. ಆಂಗ್ಲ ಸ್ತ್ರೀಯರ ಮತ್ತು ಬಾಲಕರ ಆಕ್ರಂದನದಿಂದ ವಾತಾವರಣವು ತುಂಬಿಹೋಯಿತು.

ಆಯೆಂಯೂ ಒಂದು ಡೋಣಿಯಲ್ಲಿದ್ದಳು. ಅವಳ ಬಳಿ, ಅವಳ ಹದಿನೈದು ವರ್ಷದ ಬಾಲಕನಿದ್ದನು. ಅವಳ ಯಜಮಾನನ ಮಗನೂ ಅವಳೊಂದಿಗೆ ಇದ್ದನು. ಆಯಾಳಿಗೆ ಯಾವ ಉಪಾಯವೂ ಹೊಳೆಯು ಲಿಲ್ಲ. ಅತ್ತಿತ್ತ ನೋಡಿ, ಒಮ್ಮಿಂದೊಮ್ಮೆ, ಇಬ್ಬರು ಹುಡುಗರನ್ನೂ ಹಿಡಿದುಕೊಂಡು ನದಿಗೆ ಹಾರಿದಳು; ಮತ್ತು ಈಜುತ್ತ ಎದುರುಕಡೆಯ ದಂಡೆಗೆ ತಲಪಿದಳು. ಆದರೆ, ಬಿಳಿಯರ ಡಂಡುಗಳನ್ನು ಚೆಂಡಾಡಲು ಸಿದ್ಧರಾಗಿ ಹೂಂಕರಿಸುತ್ತಿರುವ ಭಾರತೀಯರ ದಂಡಾಳುಗಳು ಅಲ್ಲಿಯೂ ಇದ್ದರು—ಅವರು ಇಂಗ್ಲಿಷರನ್ನು ಹುಡುಕುತ್ತಲೇ ಇದ್ದರು. ಆಯಾಳು ಅವರ ನಡುವೆ ಸಿಲುಕಿದಳು.

ಒಬ್ಬ ಭಾರತೀಯನು ಒದರಿದನು: "ಈ ಫಿರಂಗಿ ಹುಡುಗನನ್ನು ಇಲ್ಲಿ ಬಿಟ್ಟು ನೀನು ಓಡಿಹೋಗು. ನಾವು ಇವನ ರುಂಡವನ್ನು ಮುಂಡದಿಂದ ಬೇರ್ಪಡಿಸುವೆವು!"

ಆಯಾಳ ಮಗನು ತಾಯಿಯೊಡನೆ ಕೂಗಿ ಹೇಳಿದನು: "ಅಮ್ಮಾ, ಇವನನ್ನು ಅವರಿಗೆ ಬಿಟ್ಟುಕೊಡು! ನಮ್ಮ ಪ್ರಾಣಗಳು ಉಳಿಯುವುವು!"

ಆಯಾಳ ಮ್ಹಾಲಿಕನ ಮಗನು ಅವರ್ಣನೀಯ ಭಯದಿಂದ ಅವ ಳನ್ನು ಇನ್ನೂ ಗಟ್ಟಿಯಾಗಿ ತಬ್ಬಿಕೊಂಡು, "ಕಾಪಾಡು!" ಎಂದು ಮೊರೆಯಿಡುತಿದ್ದನು.

ಆಯಾಳ ಕರುಳು ಕಲಗಿತು. ಇಲ್ಲಿ ಅವಳು ಬಿಳಿಯ-ಕರಿಯ ಭೇದ ವನ್ನು ಕಾಣಲಾರದಾದಳು. ಭಯವಿಹ್ವಲನಾಗಿ ಪ್ರಾಣದಾನಕ್ಕಾಗಿ ಮೊರೆ ಯಿಡುತ್ತಿರುವ ಆ ಬಾಲಕನನ್ನು ರಕ್ಷಿಸಬೇಕೆನ್ನುವ ಭಾವನೆಯೊಂದೇ ಅವಳಲ್ಲಿ ಪ್ರಧಾನವಾಯಿತು. ಭಯದಿಂದ ಕಂಪಿಸುತ್ತ, ಪ್ರಾಣಭಿಕ್ಷೆ ಯನ್ನು ಬೇಡುತ್ತ ಆಯಾ ಹೇಳಿದಳು: "ಇವನು ನನ್ನ ಮ್ಹಾಲಕನ

ಮಗನು. ನೀವು ಇವನ ಪ್ರಾಣವನ್ನು ಬಿಟ್ಟುಕೊಡಿರಿ. ಭಗವಂತನು ನಿಮಗೆ ಒಳ್ಳೆಯದನ್ನು ಮಾಡುವನು!"

ಆಯಾಳ ಮಾತನ್ನು ಭಾರತೀಯ ಸೈನಿಕನೊಬ್ಬನು ದೇಶದ್ರೋಹ ವೆಂದೇ ತಿಳಿದನು. ಕೋಪದಿಂದ ಕಿಡಿಕಿಡಿಯಾಗಿ ಅವನು, "ಹುಡುಗನನ್ನು ಬಿಟ್ಟುಕೊಡು! ಇಲ್ಲದಿದ್ದರೆ ನಿನ್ನನ್ನು ಹಿಡಿದು ಕಾರಾಗ್ರಹಕ್ಕೆ ತಳ್ಳುವೆವು!" ಎಂದು ಗರ್ಜಿಸಿದನು.

ಆಯಾಳ ಮುಖವು ಒಮ್ಮಿಂದೊಮ್ಮೆ ಗಂಭೀರಭಾವ ತಾಳಿತು. ಅವಳು ದೃಢನಿಶ್ಚಯಮಾಡಿ ಹೇಳಿದಳು: "ನನ್ನ ದೇಹದಲ್ಲಿ ಪ್ರಾಣ ಉಳಿದರೆ ಈ ಬಾಲಕನನ್ನು ನಾನು ಕೈಬಿಡಲಾರೆ!"

ಆ ವೃದ್ಧೆಯ ಮಾತು ವಾತಾವರಣದಲ್ಲಿ ಧ್ವನಿಸುತ್ತಿದ್ದಂತೇ ಭಾರ ತೀಯ ಸೈನಿಕನ ಥಳಥಳಿಸುವ ಹರಿತವಾದ ಖಡ್ಗವು ಅವಳ ಕತ್ತನ್ನು ಥುಮ್ಮನೆ ಹಾರಿಸಿತು. ಮುಂಡದಿಂದ ರಕ್ತವು ಹೊರ ಚಿಮ್ಮಿತು. ಮೃತ್ಯು ಕಾಲದಲ್ಲೂ ಅವಳ ಇಂಗ್ಲಿಷ್ ಮಾಲಕನ ಬಾಲಕನು ಅವಳ ಭುಜಕ್ಕೆ ನೇತಾಡಿಕೊಂಡಿದ್ದನು. ಅವನ ಅಂತ್ಯವೂ ಅಲ್ಲಿಗೇ ಆಯಿತು.

ಈ ಕಡೆಯಲ್ಲಿ, ಆ ಆಯಾಳ ಬಾಲಕನು ಬದುಕಿ ನಿಂತಿದ್ದನು. ಅವನ ಮೂಲಕ ಈ ಆಯಾಳ ಈ ಕೊನೆಯಂಕದ ವಿವರವು ನಾಲ್ಕೂ ಕಡೆಗಳಿಗೆ ಹಬ್ಬುವಂತಾಯಿತು.

---

## ೨. ರಾಣಿ ರಾಜಬಾಯಿ

ಕ್ರಿ. ಶ. ೧೮೩೦ರಲ್ಲಿ, ವಡವಾಣ (ಕಾಥಿಯಾವಾಡ) ರಾಜ್ಯದ ಆಡಳಿತ ವನ್ನು ರಾಣಿ ರಾಜಬಾಯಿಯು ವಹಿಸಿದಳು. ರಾಜಬಾಯಿಯು ಯುದ್ಧ ಕಲೆ ಹಾಗು ನೀತಿಶಾಸ್ತ್ರದಲ್ಲಿ ಕುಶಲಳಿದ್ದಳು. ವಡವಾಣದಲ್ಲಿ ಆ ಸಮಯ ದಲ್ಲಿ ರಾಜ ಸಿಂಹಾಸನದ ಮೇಲೆ ಸ್ತ್ರೀಯರ ಅಧಿಕಾರವೂ ನಡೆಯುತ್ತಿತ್ತು. ಈ ಸಂಪ್ರದಾಯಾನುಸಾರ ರಾಜಬಾಯಿಯು ರಾಜ್ಯಶಾಸನ ಪ್ರಾಪ್ತಮಾಡಿ ದ್ದಳು. ಅವಳು ಶಾಸನ ರಚನೆಯಲ್ಲಿಯೂ ರಾಜ್ಯಾಡಳಿತದಲ್ಲಿಯೂ ಸಂಪೂರ್ಣ ನಿಷ್ಣಾತಳಿದ್ದು, ಈ ಕಾರ್ಯದಲ್ಲಿ ಸ್ತ್ರೀಯರು ಪುರುಷರಿಗಿಂತ

ಯಾವ ತರದಲ್ಲೂ ಕಡಿಮೆ ಯೋಗ್ಯತೆಯುವರಲ್ಲ ಎಂದು ಸ್ಥಿರಪಡಿಸಿದಳು. ಅವಳ ರಾಜಕಾರ್ಯ ನಿರ್ವಹಣ ನೋಡಿ ಬ್ರಿಟಿಷರು ಮೆಚ್ಚಿದ್ದರು.

ತನ್ನ ಎಪ್ಪತ್ತನೆಯ ವಯಸ್ಸಿನಲ್ಲಿ ರಾಜಬಾಯಿಗೆ ತೀರ್ಥಯಾತ್ರೆ ಮಾಡುವ ಇಚ್ಛೆಯುಂಟಾಯಿತು. ಅವಳು ತನ್ನ ಮೊಮ್ಮಗನನ್ನು ಗದ್ದುಗೆಯ ಅಧಿಕಾರಿಯಾಗಿ ಘೋಷಿಸಿದಳು. ಮತ್ತು ಆತನ ತಾಯಿ (ತನ್ನ ಸೊಸೆ)ಯನ್ನು ರಾಜ್ಯ ಸಂಚಾಲಿಕೆಯಾಗಿ ಮಾಡಿ, ತಾನು ತೀರ್ಥಯಾತ್ರೆಗೆ ಹೊರಟಳು. ಅವಳ ಪುತ್ರವಧು ಗೋವಲಬಾಯಿಯು ಸುಯೋಗ್ಯ ಸ್ತ್ರೀಯಾಗಿದ್ದಳು. ರಾಜ್ಯಸಂಚಾಲನದಲ್ಲಿ ಅವಳಿಗೆ ಪೂರ್ಣ ಯೋಗ್ಯತೆಯಿತ್ತು. ಆದರೆ, ರಾಜ್ಯದ ಅಧಿಕಾರವು ಕೈಗೆ ಬರುತ್ತಲೇ ಮನಸ್ಸಿನಲ್ಲಿ ಲೋಭವು ಬಂತು. ಗೋವಲಬಾಯಿಯು ಆಲೋಚಿಸಿದಳೇನೆಂದರೆ--"ನಾನು ನನ್ನ ಅತ್ತೆಯಂತೇ ರಾಣಿ ಏಕಾಗಬಾರದು?" ಅವಳು ತನ್ನ ಯೋಚನೆಯನ್ನು ಕಾರ್ಯರೂಪದಲ್ಲಿ ತರುವ ಸಲುವಾಗಿ ಸೈನಿಕರನ್ನು ಕೂಡಿಸಹತ್ತಿದಳು.

ರಾಣಿ ರಾಜಬಾಯಿಯು ತೀರ್ಥಯಾತ್ರೆಮಾಡಿ, ಅನೇಕ ವರ್ಷಗಳ ನಂತರ ಹಿಂದಿರುಗಿದಳು. ಅವಳು ತಲಪುತ್ತಲೇ ಯಜ್ಞಾದಿಗಳನ್ನು ಮಾಡಲು ಇಚ್ಛಿಸಿದ್ದಳು. ಆದರೆ, ದ್ವಾರದಲ್ಲೇ ಆಕೆಯನ್ನು ತಡೆಯಲಾಯಿತು. ಗೋವಲಬಾಯಿಯು ಆಕೆಗೆ ಈ ಸಂದೇಶವನ್ನು ಕಳಿಸಿದ್ದಳು: "ತಾವು ವಯೋವೃದ್ಧರಾದಿರಿ. ತಮಗೆ ಮರಣಕಾಲವು ಸನ್ನಿಹಿತವಾಯಿತು. ಪುನಃ ಯಾವುದಾದರೂ ಪುಣ್ಯಕ್ಷೇತ್ರಕ್ಕೆ ಹೋಗಿ, ಭಜನೆಮಾಡಿಕೊಂಡು ಇರುವುದೊಳ್ಳೆಯದು. ರಾಜಭವನ ಮತ್ತು ರಾಜ್ಯಕಾರ್ಯದ ಗೊಂದಲವನ್ನು ತಾವೀಗ ವಹಿಸಲು ಸಾಧ್ಯವಿಲ್ಲ."

ತೇಜಸ್ವೀ ರಾಣಿಗೆ ಅಪಮಾನವಾಯಿತು; ತಮಾಷೆ ಮಾಡಿದಂತಾಯಿತು. ಅವಳು ಅಲ್ಲಿಂದ ನೇರಾಗಿ ರಾಜಕೋಟಕ್ಕೆ ತೆರಳಿ, ಆ ಕಾಲದ ರೆಸಿಡೆಂಟ್ ಸರ್ ವಿಲ್ಲಗ್ಬಿಯೊಡನೆ ಸಹಾಯಕೇಳಿದಳು. ಸರ್ ವಿಲ್ಲಗ್ಬಿಯು ಸಹಾಯಕೊಡಲು ತಿರಸ್ಕರಿಸಿದನು.

ನಿರಾಶೆಗೊಂಡ ರಾಣಿಯು ಅಲ್ಲಿಂದ ತೆರಳಿದಳು. ತಾನೇ ಸೈನ್ಯವನ್ನು ಸೇರಿಸತೊಡಗಿದಳು. ಒಂದು ಸಾವಿರ ಸೈನಿಕರು ಕೂಡಿದರು. ತನ್ನ ಎಪ್ಪತ್ತೈದನೇ ವಯಸ್ಸಿನಲ್ಲಿ ರಾಣಿಯು ತಾನೇ ರಣಾಂಗಣಕ್ಕೆ ಇಳಿವ ನಿರ್ಧಾರ ಮಾಡಿದ್ದಳು. ಸುದೃಢ ಕವಚವನ್ನು ಧರಿಸಿದಳು. ಮಸ್ತಕದಲ್ಲಿ ಶಿರ

ಸ್ತ್ರಾಣ ಧರಿಸಿದಳು. ಕೈಯಲ್ಲಿ ಹಿರಿದ ಕತ್ತಿಯನ್ನು ಹಿಡಿದು, ಅಶ್ವವನ್ನೇರಿ, ಸೈನ್ಯವನ್ನು ನಡೆಸುತ್ತ ಮುಂದೆ ಸಾಗಿದಳು.

ರಾಜಧಾನಿಯ ಮಹಾದ್ವಾರವು ಮುಚ್ಚಲ್ಪಟ್ಟಿತ್ತು. ಕೋಟೆಯೊಳಗಿಂದ, ರಾಣಿಯ ಸೈನಿಕರ ಮೇಲೆ ಗುಂಡುಗಳ ಸುರಿಮಳೆಯಾಗುತ್ತಿತ್ತು. ಒಬ್ಬೊಬ್ಬರಾಗಿಯೇ ಸೈನಿಕರು ಬೀಳಹತ್ತಿದ್ದರು. ಸೈನ್ಯನಾಯಕನಿಗೂ ಗುಂಡುತಗಲಿತು. ಅವನು ಹೊರಳಾಡುತ್ತ ಬಂದು ರಾಣಿಯ ಪದತಲದಲ್ಲಿ ಬಿದ್ದುಬಿಟ್ಟನು. ತನ್ನ ಸೈನಿಕರು ರಣಾಂಗಣದಿಂದ ಪಲಾಯನಕ್ಕಾರಂಭಿಸಿರುವರು—ಎಂಬುದನ್ನೂ ರಾಣಿಯು ನೋಡಿದಳು. ಅವಳ ಕಣ್ಣುಗಳು ಕೆಂಪೇರಿದುವು. ತುಟಿಗಳು ಕಂಪಿಸಿದುವು. ಆ ವಯೋವೃದ್ಧೆಯಲ್ಲಿ ಯಾವ ಅದ್ಭುತಶಕ್ತಿಯು ಬಂತೋ ಹೇಳಲಾರೆವು. ಅವಳು ತನ್ನ ಕುದುರೆಯನ್ನು ಮುಂದಕ್ಕಟ್ಟುತ್ತ ನಗರದ್ವಾರವನ್ನು ಮುಟ್ಟಿದಳು. ಗುಂಡುಗಳ ಸುರಿಮಳೆಯಾಗುತಿದ್ದರೂ ಲಕ್ಷಿಸದೆ ಆಕೆ ಮುನ್ನುಗ್ಗುತಿದ್ದಳು.

ಮಹಾರಾಣಿಯ ಈ ಸಾಹಸವನ್ನು ನೋಡುತ್ತ ಸೈನಿಕರಲ್ಲೊ ಎಲ್ಲೊ ಇಲ್ಲದ ಶೌರ್ಯವೂ ಉತ್ಸಾಹವೂ ತುಂಬಿತು. ಹಿಂದಡಿಯಿಡಲಾರಂಭಿಸಿದ ಸೈನಿಕರು ಒಮ್ಮೆಂದೊಮ್ಮೆ ಮುಂದೆ ಸಾಗಿಬಂದರು. ಮಹಾದ್ವಾರದ ಮೇಲೆ ಆಘಾತಕ್ಕಾರಂಭವಾಯಿತು. ನಗರದೊಳಗಿನ ಸೈನಿಕರು ವೃದ್ಧರಾಣಿಯ ಸಾಹಸವನ್ನು ನೋಡಿ ಭಯಗೊಂಡರು. ಅವರು ಓಡಿಹೋಗಲು ತೊಡಗಿದರು. ಹೆಬ್ಬಾಗಿಲುಗಳು ಮುರಿದುಹೋಗುವುವು—ಎಂದು ದ್ವಾರಪಾಲಕನು ತಿಳಕೊಂಡನು. ಅಥವಾ ದ್ವಾರಪಾಲಕನು ಕೀಲುಗಳನ್ನು ತೆಗೆದುಬಿಟ್ಟನು. ಈ ಸಮಾಚಾರ ತಿಳಿಯುತ್ತಲೇ ಗೋವಲಬಾಯಿಯು ತಾನೂ ಪಲಾಯನಮಾಡಿದಳು.

ಪ್ರಜೆಗಳು ತಮ್ಮ ವೃದ್ಧರಾಣಿಯನ್ನು ಸಂತೋಷದಿಂದ ಸ್ವಾಗತಿಸಿದರು.

ರಾಣಿ ರಾಜಬಾಯಿಯು ಆ ಎಪ್ಪತ್ತೈದನೇ ವಯಸ್ಸಿನಲ್ಲಿಯೂ ಯುದ್ಧಮಾಡುವಷ್ಟು ಹುರುಪನ್ನೂ ಧೈರ್ಯ ಶೌರ್ಯಗಳನ್ನೂ ಹೊಂದಿದ್ದವಳಾಗಿ, ತನ್ನ ರಾಜ್ಯವನ್ನು ತಿರಿಗಿ ತಾನು ಗಳಿಸಿಕೊಂಡಳು. ಆ ಮೇಲೆ ಈ ವೀರಾಂಗನೆಯು, ತನ್ನ ಅಂತಿಮ ಕಾಲದ ವರೆಗೆ ಚೆನ್ನಾಗಿ ರಾಜ್ಯಭಾರ ನಡೆಸಿಕೊಂಡಿದ್ದಳು.

---

# ೩. ವೀರಕನ್ಯೆ ವಿದ್ಯುಲ್ಲತಾ

ಮಧ್ಯಕಾಲೀನ ಭಾರತದ ರಾಜಮನೆತನದ ರಾಣಿಯರು ಯವನರಿಂದ ಮತ್ತು ಮ್ಲೇಂಛರಿಂದ ತಮ್ಮ ಸತೀತ್ವದ ಹಾಗು ದೇಶದ ರಕ್ಷಣೆಮಾಡಲೋಸುಗ ಯಾವ ತರದ ತಾಗ್ಯವನ್ನೂ ಧೈರ್ಯ ಸಾಹಸಗಳನ್ನೂ ಪ್ರದರ್ಶಿಸುತ್ತಿದ್ದರೋ ಹಾಗೆಯೇ ಸಾಮಾನ್ಯ ಗೃಹಸ್ಥರ ಬಾಲಿಕೆಯರೂ ತಮ್ಮ ದೇಶದ ರಕ್ಷಣೆಗಾಗಿ ಪ್ರಾಣಗಳನ್ನು ಬಲಿಕೊಡಲು ಸಿದ್ಧರಾಗಿರುತಿದ್ದ ಕಾಲದಲ್ಲಿ ನಡೆದ ಘಟನೆಗಳ ಉಲ್ಲೇಖವಿದು:

ಅಲ್ಲಾವುದ್ದೀನನ ಚಿತ್ತೋಡ ಆಕ್ರಮಣವು ಒಂದು ಇತಿಹಾಸಪ್ರಸಿದ್ಧ ಘಟನೆಯಾಗಿದೆ. ಚಿತ್ತೋಡ ಮತ್ತು ರಣಥಂಬೋರವನ್ನು ಗೆಲ್ಲುವುದು—ಇದನ್ನು ಯವನಾಧಿಪತಿಯು ಆ ಸಮಯದಲ್ಲಿ ತನಗೊಂದು ದೊಡ್ಡ ಗೌರವವೆಂದು ತಿಳಿಯುತಿದ್ದನು. ಚಿತ್ತೋಡದ ಮೇಲೆ ದಂಡೆತ್ತಿ ಬರಲು ಅಲ್ಲಾವುದ್ದೀನನು ಯೋಚಿಸುತಿದ್ದನು. ರಾಣಾನ ಸೈನಿಕರು ಕೂಡ ಸಾಧಾರಣರಿರಲಿಲ್ಲ. ಚಿತ್ತೋಡದ ಒಬ್ಬ ಪ್ರಸಿದ್ಧ ಸರದಾರನ ಪುತ್ರ ಸಮರಸಿಂಹನು ವೀರತೆ ಹಾಗು ಸೌಂದರ್ಯದಲ್ಲಿ ಪ್ರಸಿದ್ಧನಾಗಿದ್ದನು. ಈ ಕಥೆಯ ನಾಯಕಿ ವಿದ್ಯುಲ್ಲತೆಯು ಅವನನ್ನು ಪತಿಯಾಗಿ ಸ್ವೀಕರಿಸುವ ಸುಖಸ್ವಪ್ನ ಕಾಣುತಿದ್ದಳು.

ವಿದ್ಯುಲ್ಲತೆಯು ಕೂಡ ಚಿತ್ತೋಡದ ಒಬ್ಬ ವೀರ ಸೈನಿಕನ ಕನ್ಯೆಯಾಗಿದ್ದಳು. ಅವಳು ಚಿತ್ತೋಡದಲ್ಲಿ ಎಲ್ಲರಿಗಿಂತ ಅಧಿಕ ಚೆಲುವೆಯೆಂದು ತಿಳಿಯಲ್ಪಡುತಿದ್ದಳು. ರೂಪ-ಸೌಂದರ್ಯ ಇವೆರಡೂ ಇವಳ ಜೀವನದ ಸಂಗಾತಿಗಳಾಗಿದ್ದುವು. ಹಾಗೆಯೇ—ಅವಳು ಉದಾರಿಯೂ ಸದ್ಗುಣ ಸಂಪನ್ನಳೂ ಆಗಿದ್ದಳು.

ಅಲ್ಲಾವುದ್ದೀನನ ಆಕ್ರಮಣವನ್ನು ತಡೆಯಲು ಸಮರಸಿಂಹನಿಗೆ ಕೂಡ ಯುದ್ಧಕ್ಕೆ ಹೋಗಬೇಕಾಗಿತ್ತು. ಎಷ್ಟೋ ದಿನಗಳು ಕಳೆದುವು. ಅವನು ವಿದ್ಯುಲ್ಲತೆಯನ್ನು ನೋಡದಾದನು. ವಿದ್ಯುಲ್ಲತೆ ಕೂಡ ಇವನ ಅಗಲುವಿಕೆಯಿಂದ ಉದಾಸೀನಳಾಗಿದ್ದಳು. ಅವಳ ಹೃದಯವು ಬತ್ತಿ ಹೋಗುತ್ತಲಿತ್ತು. ಅವಳು ದಿನಾಲೂ ಅಸ್ತವ್ಯಸ್ಥವಾಗಿ ತನ್ನ ಮನೆಯ ಎದುರಿನ ತೋಟದಲ್ಲಿ ಕುಳಿತುಕೊಳ್ಳುತಿದ್ದಳು. ಮತ್ತು ತನ್ನ ಭಾವೀ

ಪತಿಯು ತನ್ನ ಕರ್ತವ್ಯವನ್ನು ಮಾಡುತ್ತ ಇರುವನು ಎಂದು ಯೋಚಿಸಿ, ಆ ಭಾವನೆಯಿಂದ ಸಂತೋಷಪಡುತ್ತಿದ್ದಳು.

ರಾತ್ರಿಯು ಸಮಯವಾಗಿತ್ತು. ಚಂದ್ರನು ತನ್ನ ಷೋಡಶ ಕಲೆಗಳಿಂದ ತುಂಬಿ ಗಗನದಲ್ಲಿ ವಿರಾಜಮಾನನಾಗಿದ್ದನು. ಹಾಲಿನ ಧಾರೆಯು ಪೃಥ್ವಿಯಲ್ಲಿ ಸುರಿಯುವಂತಿತ್ತು. ಇಂತಹ ಸ್ವಚ್ಛ ತಿಂಗಳಬೆಳಕಿನಲ್ಲಿ ಆ ಬಾಲೆಯು—ಸಮರನು ಒಮ್ಮಿಂದೊಮ್ಮೆ ತನ್ನ ಎದುರಿಗೆ ಬಂದು ನಿಂತುದನ್ನು ನೋಡಿದಳು. ಅವಳಿಗೆ ಬಹಳ ಆಶ್ಚರ್ಯವಾಯಿತು.

ಸಮರನು ಹೇಳಿದನು: "ನಾನು ನಿನ್ನ ಬಳಿಗೆ ಒಂದು ವಿಶೇಷ ಕಾರ್ಯದ ಸಲುವಾಗಿ ಬಂದಿರುತ್ತೇನೆ. ಇನ್ನು ಕೆಲವೇ ದಿನಗಳಲ್ಲಿ ಎಲ್ಲ ರಜಪೂತರು ಮುಸಲ್ಮಾನ ಸೈನಿಕರ ಕ್ರೋಧಾಗ್ನಿಯಲ್ಲಿ ಸುಟ್ಟು ಭಸ್ಮವಾಗುವರು. ಪ್ರೇಮದ ಪವಿತ್ರ ಭಾವನೆಯನ್ನು ತಡೆದು ಸಮರಾಗ್ನಿಯಲ್ಲಿ ಬಿದ್ದು ಸುಟ್ಟುಕೊಳ್ಳಲು ನನಗಾಗಿ ನಿನ್ನ ಪ್ರೇಮ ಸ್ವರ್ಗ ಮತ್ತು ಅಪವರ್ಗವಿದೆ. ಸೇನಾಪತಿಯ ಕಣ್ಣಿನಿಂದ ಮರೆಸಿ ನಾನು ರಣರಂಗದಿಂದ ಓಡಿಬಂದಿದ್ದೇನೆ. ನಾವಿಬ್ಬರೂ ಈಗ ಓಡಿಹೋಗಬೇಕು. ಇಲ್ಲದೆ ಹೋದರೆ ನಮ್ಮ ಪ್ರೇಮವು ಮಣ್ಣುಪಾಲಾಗಿ ಹೋಗುವುದು.

ಇದನ್ನು ಕೇಳುತ್ತಲೇ ವಿದ್ಯುಲ್ಲತೆಯ ಕಣ್ಣುಗಳು ಕ್ರೋಧದಿಂದ ಕೆಂಪಡರಿದುವು. ಅವಳು ಹೇಳಿದಳೇನೆಂದರೆ: "ಸಮರ! ಮಾತೃಭೂಮಿಯ ಮೇಲೆ ಆಕ್ರಮಣವಾಗುತ್ತ ಇದೆ. ರಜಪೂತನ ಬಾಯಿಂಯಿಂದ ಇಂತಹ ಹೇಡಿತನದ ಮಾತು ನನಗೆ ಆಶ್ಚರ್ಯವನ್ನುಂಟುಮಾಡಿದೆ! ರಜಪೂತ ಕನ್ಯೆಯರು ಇಂತಹ ಪುರುಷರನ್ನು ಪ್ರೀತಿಸುವುದು ಅಥವಾ ವಿವಾಹಮಾಡಿಕೊಳ್ಳುವುದು ಪಾಪವೆಂದು ತಿಳಿಯುತ್ತಾರೆ! ಯಾರು ತನ್ನ ಕರ್ತವ್ಯವನ್ನು ಮರೆತು ಹೇಡಿತನವನ್ನು ಪ್ರದರ್ಶಿಸುವರೋ ಅವರಿಗೆ ವೀರ ನಾರಿಗಳ ಹೃದಯಗಳಲ್ಲಿ ಸ್ಥಾನವಿಲ್ಲ. ಅಂಥವರಿಗೆ ಧಿಕ್ಕಾರ! ಒಂದು ವೇಳೆ ನೀವು ರಣರಂಗದಲ್ಲಿ ವೀರಸ್ವರ್ಗವನ್ನು ಹೊಂದಿದರೆ ನನ್ನ ಆನಂದಕ್ಕೆ ಪಾರವಿರಲಿಲ್ಲ. ನಾವು ಸಂಸಾರದ ಸಲುವಾಗಿ ಬಂಧನದಲ್ಲಿ ಬೀಳಬಾರದು. ತ್ಯಾಗದಿಂದಲೇ ಸ್ವರ್ಗಸುಖವು ನಮ್ಮಿಬ್ಬರಿಗೆ ಸ್ಥಿರವಾಗಿರುವದು."

ವೀರ ಬಾಲೆಯ ಶಬ್ದಬಾಣವು ಆ ದುಷ್ಟನ ಪಾಷಾಣಹೃದಯವನ್ನು ತೆರೆಯಲಿಲ್ಲ. ಕೊನೆಗೂ ಅವನು, ತಾನು ಯವನರೊಡನೆ ಸೇರಿಕೊಂಡು

ಚಿತ್ತೋಡದ ಎಲ್ಲ ರಹಸ್ಯಗಳನ್ನು ಪ್ರಕಟಮಾಡುವುದೊಳ್ಳೆಯದೆಂದು ಆಲೋಚಿಸಿದನು. ಯವನರ ಕಡೆ ಸೇರಿದರೆ ಅವನ ಪ್ರಾಣವು ಉಳಿಯುವುದು; ಮತ್ತು ಅವನ ಪ್ರಿಯತಮೆ ವಿದ್ಯುಲ್ಲತೆಯು ಅವನಿಗೆ ಸಿಕ್ಕುವಳು.

ಹೀಗೆ ಯೋಚಿಸಿ, ಆ ಕಾಪುರುಷನು, ಅಲ್ಲಿಂದ ಹೋಗಿ ಯವನ ಸೇನಾಪತಿಯನ್ನು ಕಂಡನು; ಮತ್ತು ಎಲ್ಲ ಸಂಗತಿಯನ್ನೂ ತಿಳಿಸಿದನು. ಇದರ ಪರಿಣಾಮವೇನಾಯಿತೆಂದರೆ ಸಾವಿರಗಟ್ಟಲೆ ಸ್ತ್ರೀಯರೂ ಪದ್ಮಿನಿಯೊಡನೆ ಚಿತೆಗೆ ಹಾರಿ, ಸುಟ್ಟು ಬೂದಿಯಾಗಿ ಹೋದರು.

ಈ ಭೀಷಣಕಾಂಡ ಮುಗಿದ ಮೇಲೆ ಅವನು ವಿದ್ಯುಲ್ಲತೆಯ ಸ್ಮರಣೆ ಮಾಡಿ, ಚಿತ್ತೋಡದ ಕಡೆಗೆ ತೆರಳಿದನು. ಅವನೊಡನೆ ನೂರಾರು ಮುಸಲ್ಮಾನ ಸೈನಿಕರೂ ಕೂಡ ಇದ್ದರು.

ಇಷ್ಟು ದೊಡ್ಡ ಅಗ್ನಿಕಾಂಡದ ಕಾರಣಭೂತನು ಸಮರಸಿಂಹನೆಂದು ವಿದ್ಯುಲ್ಲತೆಗೆ ತಿಳಿದಿರಲಿಲ್ಲ. ಅವಳು ಸಮರನನ್ನು ಕಂಡೊಡನೆ ಒಂದು ಕ್ಷಣಕ್ಕೆ ಹರ್ಷದಿಂದ ಕುಣಿದೆದ್ದಳು. ಆದರೆ, ಮರುಕ್ಷಣದಲ್ಲೆ ಬೆಚ್ಚಿಬಿದ್ದಳು. ಮುಸಲ್ಮಾನ ಸೈನಿಕರು ಅವನನ್ನು ಕೈದಿಯಾಗಿ ಮಾಡಿರಲಿಲ್ಲ. ಇದೇನು? ಪಾಪಿ ಸಮರಸಿಂಹನು ದೇಶಕ್ಕೆ ದ್ರೋಹಮಾಡಿರುವನೇ?

ಆಗಲೇ ಆ ಅಧಮನು ಅವಳನ್ನು "ಪ್ರಿಯೆ" ಎಂದು ಸಂಬೋಧಿಸಲು ಇಚ್ಛಿಸಿದನು. ಅವನ ಪಾಪಿ ಅಧರಗಳು ಅವಳ ಪವಿತ್ರ ಅಧರಾಮೃತ ಪಾನಮಾಡಲು ಇಚ್ಛಿಸಿದುವು.

ಆಗ ಆ ಸಿಂಹಿಣಿಯು ಅವನೊಡನೆ ಗರ್ಜಿಸಿ ಹೇಳಿದಳು: "ನನ್ನ ಶರೀರವನ್ನು ನೀನು ಆಲಿಂಗಿಸಿ ಅಪವಿತ್ರವಾಗಿ ಮಾಡುವುದಕ್ಕಿಂತ ಉಕ್ಕಿ ಬರುವ ನೀರಿನಲ್ಲಿ ಮುಳುಗಿ ಸಾಯು! ರಜಪೂತ ಸ್ತ್ರೀಯರ ಹೃದಯದಲ್ಲಿ ಹೇಡಿಗಳಿಗೆ ಸ್ಥಾನವಿಲ್ಲ!"

ವಿದ್ಯುಲ್ಲತೆಯು ಕಟಿಯಿಂದ ಕಠಾರಿಯನ್ನು ತೆಗೆದುಕೊಂಡು ತನ್ನ ಎದೆಗೆ ತಿವಿದುಕೊಂಡಳು. ಸಮರನು ಅವಳನ್ನು ಹಿಡಿದುಕೊಳ್ಳಲು ಮುಂದಾದನು. ಆದರೆ ಅವಳು ಆ ಪಾಪಿಯ ಕೈಗಳಿಂದ ಅಪವಿತ್ರವಾಗುವ ಮೊದಲೇ ಸ್ವರ್ಗಸೇರಿದ್ದಳು.

---

# ೪. ಸತೀ ಜಸಮಾ

ಪಾಟ್ನಾದ ಅರಸನಾದ ಸಿದ್ಧರಾಜನು ಬಹಳ ವಿಲಾಸಿಯಾಗಿದ್ದನು. ಅವನು ಅನೇಕ ಯುವತಿಯರ ಸತೀತ್ವವನ್ನು ಕೆಡಿಸುತಿದ್ದನು. ಅವನ ಯೌವನದ ಮದದಿಂದ, ಹಲವು ಅಬೋಧಸ್ತ್ರೀಯರಿಗೆ ತಮ್ಮ ಸತೀತ್ವವನ್ನು ಬಿಡಬೇಕಾಯಿತು. ಅವನ ಕೆಲವು ಗುಪ್ತಚರರು ನಗರದ ಸೌಂದರ್ಯವತಿಯರನ್ನು ಮತ್ತು ಯೌವನಸಂಪನ್ನರಮಣಿಯರನ್ನು ಶೋಧಿಸುತ್ತ ತಿರುಗಾಡುತಿದ್ದರು.

ಅರಸನು ನಗರದ ಸಮೀಪ ಒಂದು ಸರೋವರವನ್ನು ರಚಿಸುವ ಯೋಚನೆಯನ್ನು ಮಾಡಿದನು. ಒಂದು ಶುಭಮುಹೂರ್ತದಲ್ಲಿ ಸರೋವರದ ಕೆಲಸವನ್ನು ಆರಂಭಿಸಿದರು. ಸಾವಿರಗಟ್ಟಲೆ ಶ್ರಮಜೀವಿಗಳು ಕೆಲಸಮಾಡತೊಡಗಿದರು. ಅವರಿಗೆ ವಾಸಮಾಡಲು ಗುಡಿಸಲುಗಳನ್ನು ಅಲ್ಲಿಯೇ ಕಟ್ಟಿದ್ದರು. ಕೆಲಸಗಾರರ ಮುಖಂಡನು ಭೀಕಮ. ಈ ಭೀಕಮನ ಸಹಧರ್ಮಿಣಿಯ ಹೆಸರು ಜಸಮಾ. ಜಸಮಾ ಬಹಳ ಸುಂದರಿಯಾಗಿದ್ದಳು.

ಜಸಮಾ ಕೆಲಸಮಾಡುತ್ತಿರುವಾಗ ಸಿದ್ಧರಾಜನು ಅವಳನ್ನು ನೋಡಿದನು. ಅವನ ಹೃದಯವು ಕಂಪಿಸಿತು. ಇಷ್ಟು ಸುಂದರರೂಪವನ್ನು ನೋಡಿ ಒಮ್ಮೆಗೇ ಅವನು ವಿಸ್ಮಿತನಾದನು. ಕೂಡಲೇ ಜಸಮಳನ್ನೂ ಅವಳ ಪತಿ ಭೀಕಮನನ್ನೂ ಕರೆದು, “ನೀವು ಈ ಕೆಲಸವನ್ನು ಬಿಟ್ಟುಬಿಡಿರಿ. ಅರಮನೆಯಲ್ಲಿಯೇ ಒಳ್ಳೇ ನೌಕರಿಯನ್ನು ಮಾಡಿರಿ. ಜಸಮಳು ಅಂತಃಪುರದಲ್ಲಿಯೇ ಇರಬಹುದು.”

ಭೀಕಮನ ಮನಸ್ಸು ತಳಮಳಿಸಿತು. ಅರಮನೆಯಲ್ಲಿ ಕೆಲಸಮಾಡುವುದು ಸೌಭಾಗ್ಯದ ವಿಷಯವಾಗಿದೆ. ಆದರೆ, ಜಸಮಳು ಸಿದ್ಧರಾಜನ ದೃಷ್ಟಿಯಲ್ಲಿ ವಿಷವನ್ನು ನೋಡಿದ್ದಾಳೆ. ಅವಳು ಪತಿಯೊಡನೆ ಅದನ್ನು ಸ್ವೀಕಾರಮಾಡಬಾರದೆಂದಳು. ಭೀಕಮನು ಮಹಾರಾಜನೊಡನೆ—“ಮಹಾರಾಜ, ನಮಗೆ ಈ ಕೆಲಸವೇ ಒಳ್ಳೆಯದು” ಎಂದನು. ಈ ರೀತಿ ಉತ್ತರವನ್ನು ಕೊಟ್ಟು ಪತಿ-ಪತ್ನಿಯರು ಪುನಃ ತಮ್ಮ ಕೆಲಸಕ್ಕೆ ತೊಡಗಿದರು.

ಮಧ್ಯರಾತ್ರಿಯ ಸಮಯ. ನಗರದ ಜನರೆಲ್ಲ ನಿದ್ರಾದೇವಿಯ ವಶರಾಗಿದ್ದರು. ಸಿದ್ಧರಾಜನ ಇಬ್ಬರು ಸೈನಿಕರು ಗುಡಿಸಲನ್ನು ಹೊಕ್ಕರು. ಮತ್ತು ಭೀಕಮನೊಡನೆ, "ಭೀಕಮಾ, ನಿನ್ನ ಪತ್ನಿ ಜಸಮಳನ್ನು ನಾವು ಸೆರೆಹಿಡಿಯುತ್ತೇವೆ. ಆವಳು ಅರಸಿಯಾಗುವಳು" ಎಂದರು. ಇದನ್ನು ಕೇಳಿದ ಕ್ಷಣದಲ್ಲಿ ಜಸಮಳು ಕ್ರೋಧಾಗ್ನಿಯಿಂದ ಕಂಪಿಸುತ್ತ, ಕೋಣೆಯಲ್ಲಿದ್ದ ಚೂರಿಯನ್ನು ತೆಗೆದು ಸಿಂಹಿಣಿಯಂತೆ ಗರ್ಜಿಸಿ, ಮೇಲಿನ ಮಾತು ಉಚ್ಚರಿಸಿದ ಸೈನಿಕನ ಮೇಲೆ ಹಾರಿದಳು. ಚೂರಿಯನ್ನು ಅವನ ಎದೆಗೆ ಚುಚ್ಚಿಬಿಟ್ಟಳು. ಸೈನಿಕನ ಶ್ವಾಸವು ಆಗಲೇ ಹಾರಿತು. ಉಳಿದೊಬ್ಬ ಸೈನಿಕನು ತನ್ನ ಪ್ರಾಣವನ್ನು ರಕ್ಷಿಸಿಕೊಂಡು ರಾಜನ ಬಳಿಗೆ ಓಡಿದನು.

ಸೈನಿಕನ ಮರಣವಾರ್ತೆಯನ್ನು ಕೇಳಿ ಸಿದ್ಧರಾಜನು ತನ್ನ ತುಟಿಯನ್ನು ಕಚ್ಚಿದನು. ರಾಜನು ಮಂತ್ರಿಗೆ ಆಜ್ಞೆಯಿತ್ತನು—"ಭೀಕಮ ಮತ್ತು ಜಸಮಳನ್ನು ಸೆರೆಹಿಡಿದು ತಾ!"

ಮಂತ್ರಿ ಹೇಳಿದನು: "ಮಹಾರಾಜ, ನಾನು ತಮ್ಮ ಪಿತನ ಕಾಲದಿಂದಲೂ ನ್ಯಾಯವನ್ನು ಪಾಲಿಸುತ್ತ ಬಂದಿದ್ದೇನೆ. ಈಗ ಕೂಡ ಅನ್ಯಾಯ ಮಾಡಲಾರೆ. ಭೀಕಮನದೇನೂ ದೋಷವಿಲ್ಲ. ದೋಷವು ತಮ್ಮದಾಗಿದೆ. ಈ ಅತ್ಯಾಚಾರಕ್ಕೆ ನಾನು ಸಹಾಯಮಾಡಲಾರೆನು. ಜಸಮಳು ಪತಿವ್ರತಾ ನಾರಿಯಾಗಿದ್ದಾಳೆ. ಇದನ್ನು ತಾವು ಮರೆಯಬೇಡಿರಿ!"

ಸಿದ್ಧರಾಜನು ಕ್ರೋಧಿತನಾಗಿ ಮಂತ್ರಿಯನ್ನು ಸೆರೆಯಲ್ಲಿಡಿಸಿದನು.

ಸಹಸ್ರಾರು ಸೈನಿಕರು ಕೂಲಿಕಾರರ ಗುಡಿಸಲಿನ ಬಳಿಗೆ ಮುಟ್ಟಿದರು. ಎಲ್ಲ ಗುಡಿಸಲುಗಳು ಬರಿದಾಗಿದ್ದುವು. ಎಲ್ಲರೂ ಅಲ್ಲಿಂದ ಹೊರಟರು. ಭೀಕಮ ಮತ್ತು ಜಸಮಳು ಬಹಳ ಗಾಬರಿಯಿಂದ ಓಡುತ್ತಿದ್ದರು. ಅರಸನ ಸೈನಿಕರು ಬಂದು ತಮ್ಮನ್ನು ಕೊಲ್ಲುವರೆಂದು ಅವರಿಗೆ ತಿಳಿದಿತ್ತು. ಸೈನಿಕರು ಕೂಲಿಗಾರರನ್ನು ಹಿಡಿಯಲು ಕುದುರೆಗಳನ್ನು ಬಹಳ ವೇಗವಾಗಿ ಓಡಿಸಿದರು. ಸ್ವಲ್ಪ ಮುಂದೆ ಹೋಗಲು ಅವರ ದಳವು ಕಾಣಿಸಿತು. ಕುದುರೆಯ ಸಪ್ಪಳ ಕೇಳಿ ಭೀಕಮನ ಕಾಲಡಿಯ ನೆಲವು ಕುಸಿದು ಬಿದ್ದಂತಾಯಿತು.

ಕೂಲಿಕಾರರೂ ತಮ್ಮ ಕರ್ತವ್ಯವನ್ನು ಮಾಡಿ ಮುಗಿಸಿದರು. ಯುದ್ಧವು ಮುಂದುವರಿಯಿತು. ಹೆಣದ ಮೇಲೆ ಹೆಣವು ಬೀಳಲಾರಂಭಿ

ಸಿತು. ರಕ್ತದ ಕಾಲುವೆ ಹರಿಯಿತು. ಜಸಮಳ ಕೈಯಲ್ಲಿ ಖಡ್ಗವು ಜಗಮಗಿಸುತಿತ್ತು. ಅವಳು ವೀರತೆಯಿಂದ ಶತ್ರುಗಳ ಸಂಹಾರವನ್ನು ಮಾಡುತ್ತಲಿದ್ದಳು. ಸೈನಿಕರೂ ಶ್ರಮಿಕರೂ ಸತ್ತು ಬೀಳುತಿದ್ದರು. ಜಸಮಳು ಉಳಿದ ಕೆಲವು ಸೈನಿಕರನ್ನು ಯಮಪುರಕ್ಕೆ ಕಳಿಸುತಿದ್ದಳು. ಈಗ ಬಹುಶಃ ಸಿದ್ಧರಾಜನೊಬ್ಬನೇ—ಉಳಿದನು. ಅವನನ್ನು ನೋಡಿದೊಡನೆ ಜಸಮಳು ಚಂಡಿಯಂತಾದಳು. "ಸ್ತ್ರೀಯರ ಹುಚ್ಚಿನ ನಾಯಿಯೆಂದು ಇವನನ್ನು ಕರೆಯಿರಿ" ಎನ್ನುತ್ತ ಜಸಮಳು ಒಂದೇ ಕೈಯಿಂದ ಸಿದ್ಧರಾಜನ ತಲೆಯನ್ನು ಮುಂಡದಿಂದ ಬೇರ್ಪಡಿಸಿದಳು. ಮಸ್ತಕವು ಉರುಳಿ ದೂರ ಹೋಗಿ ಬಿತ್ತು.

ಹೆಣಗಳ ಮಧ್ಯದಲ್ಲಿ ಜಸಮಳೊಬ್ಬಳೇ ಇದ್ದಳು. ಅವಳು ತನ್ನ ಪತಿಯ ಹೆಣವನ್ನು ಹುಡುಕಿದಳು. ಅವಳ ಹೃದಯವು ಚೂರಾಗಿತ್ತು. ಆಗಲೇ ಅವಳು ತನ್ನ ಕೋಮಲ ಹೃದಯಕ್ಕೆ ಖಡ್ಗವನ್ನು ಚುಚ್ಚಿಬಿಟ್ಟು, ತನ್ನ ಪ್ರಿಯತಮನ ನಿರ್ಜೀವ ದೇಹದ ಮೇಲೆ ಬಿದ್ದುಬಿಟ್ಟಳು. ಅವಳ ಪ್ರಾಣವು ಈ ದುಷ್ಟಜಗತ್ತನ್ನು ಬಿಟ್ಟು ಪವಿತ್ರಲೋಕವನ್ನು ಸೇರಿತು. ರಕ್ತದಲ್ಲಿ ಸಾವಿರಗಟ್ಟಲೆ ಹೆಣಗಳನ್ನು ನೋಡಿ ಕಲಂಕಿತ ಚಂದ್ರನು ತನ್ನ ಚಿರುನಗೆ ನಗುತಿದ್ದನು.

ಜನರು ಅಲ್ಲಿಯೇ ಇಬ್ಬರ ಸಮಾಧಿಗಳನ್ನು ಕಟ್ಟಿದರು. ಈಗಲೂ ಮಾಘ ಹುಣ್ಣಿಮೆಗೆ ಅಲ್ಲಿ ಒಂದು ಜಾತ್ರೆಯು ನಡೆಯುತ್ತದೆ. ಸಹಸ್ರ ಸ್ತ್ರೀಯರೂ ಪುರುಷರೂ ಸಮಾಧಿಯಲ್ಲಿ ಪುಷ್ಪಮಾಲೆಗಳನ್ನು ಹಾಕುತ್ತಾರೆ, ಮತ್ತು ಭಕ್ತಿಪೂರ್ವಕವಾಗಿ ಪ್ರಾರ್ಥನೆಯನ್ನು ಮಾಡುತ್ತಾರೆ.

---

# ೫. ವೀರಾಂಗನಾ ಹಾಡಿರಾಣಿ

ಚಿತ್ತೋಡದ ಸಿಂಹಾಸನದ ಮೇಲೆ ರಾಣಾ ರಾಜಸಿಂಹನು ಆಸೀನನಾಗಿದ್ದನು. ಬಾದಶಹ ಔರಂಗಜೇಬನು ರೂಪನಗಢದ ರಾಜಕನ್ಯೆಯನ್ನು ವಿವಾಹಮಾಡಿಕೊಳ್ಳಲು ಇಚ್ಛಿಸಿದ್ದನು. ರಾಜಕುಮಾರಿ ಚಂಚಲಕುಮಾರಿಯು ಅಥವಾ ರೂಪವತಿಯು ಚಿತ್ತೋಡದ ರಾಣನ ಬಳಿಗೆ ಪತ್ರ ಕಳುಹಿದಳೇನೆಂದರೆ—"ಏನು ರಾಜಸಿಂಹ? ಸಿಸೋದಿಯಾ ಕುಲದ ಭೂಷಣವನ್ನು

ಕಾಪಾಡುವಿರೋ? ಅಥವಾ ಗಿಡುಗನೊಂದಿಗೆ ರಾಜಹಂಸಿನಿಯ ವಿವಾಹ ವಾಗಗೊಡುವಿರೋ?"

ರಾಣನು ಸಹಾಯದ ಬಗ್ಗೆ ವಚನಬದ್ಧನಾದನು. ಮತ್ತು ಶೂರ, ವೀರ ಸರದಾರನಾದ ಚೂಂಡಾವತನೊಡನೆ ಹೇಳಿದನು: "ನಾನು ಎಷ್ಟರ ವರೆಗೆ ರಾಠೋಡದ ಕನ್ಯೆಯ ಪಾಣಿಗ್ರಹಣ ಮಾಡಿ ಉದಯಪುರಕ್ಕೆ ಹಿಂದಿರುಗಲಾರೆನೋ ಅಷ್ಟರ ವರೆಗೆ ಷಾಹೀ ಸೇನೆಯನ್ನು ಮಾರ್ಗದಲ್ಲಿ ತಡೆದಿಡುವೆನು."—ಹೀಗೆನ್ನುತ್ತ ಅವನು ಸುಸಜ್ಜಿತ ಸೇನೆಯನ್ನು ಕರ ಕೊಂಡು ರೂಪನಗಡದ ಕಡೆಗೆ ಮುಂದರಿದನು.

ಸರದಾರ ಚೂಂಡಾವತನು ತನ್ನ ರಾಜಧಾನಿಯಲ್ಲಿ ಯುದ್ಧದ ಡಂಗುರಹೊಡೆಯಿಸಿದನು. ಕ್ಷತ್ರಿಯರು ಹೊಡೆಯಲೂ ಮಡಿಯಲೂ ಸಿದ್ಧರಾದರು. ರಾಣನಿಗಾಗಿ ಪ್ರಯಾಣಮಾಡುವ ಸಮಯದಲ್ಲಿ ಸರ ದಾರನು ತನ್ನ ನವವಿವಾಹಿತೆ ಯೌವನೋನ್ಮಾದಿನಿ ರಾಣಿಯನ್ನು ನೋಡಿ ದನು. ಅವನ ಮುಖವು ಒಮ್ಮಿಂದೊಮ್ಮೆ ಸಪ್ಪಗಾಯಿತು. ಅವನು ಮುಂದಕ್ಕೂ ಹೋಗದಾದನು. ಹಿಂದಕ್ಕೂ ಬರದಾದನು.

ತನ್ನ ಪತಿಯ ಶಿಥಿಲತೆಯನ್ನು ಕಂಡು ಹಾಡೀ ರಾಣಿಗೆ ಬಹಳ ಆಶ್ಚರ್ಯವಾಯಿತು. ಅವಳು, ಅವನ ಉದಾಸೀನಭಾವದ ಕಾರಣವನ್ನು ತಿಳಿಸಬೇಕೆಂದು ಆಗ್ರಹತೊಟ್ಟಳು. ಅವನ ಚಿಂತೆಯೇನಾದರೂ ಇದ್ದರೆ, ತನ್ನ ಕೈಲಾದರೆ, ಅದನ್ನು ಪರಿಹರಿಸುವೆನೆಂದು ಆಶ್ವಾಸನೆಯಿತ್ತಳು. ಸರ ದಾರನು ಎಲ್ಲವನ್ನೂ ವಿವರಿಸಿದನು. ಮತ್ತೆ ಹೇಳಿದನು: "ನನಗೆ ಮರಣದ ಬಗ್ಗೆ ಯಾವ ಭಯವೂ ಇಲ್ಲ. ವೀರನು ರಣದಲ್ಲಿ ಸಾಯುವುದು ಸಹಜವೇ ಇದೆ. ನನ್ನ ಚಿಂತೆಯು ಕೇವಲ ಈ ವಿಷಯವಾಗಿದೆ—ನೀನು ವೈವಾಹಿಕ ಜೀವನದ ಯಾವ ಸುಖವನ್ನೂ ತಿಳಿಯಲಿಲ್ಲ."

ರಾಣಿಯು ಸಿಂಹಿಣಿಯಂತೆ ಎದ್ದು ನಿಂತು ಹೇಳಿದಳು: "ಪ್ರಾಣನಾಥ, ತಾವು ನನ್ನ ಚಿಂತೆಯನ್ನು ಬಿಟ್ಟುಬಿಡಿರಿ. ರಜಪೂತಾನಿಯು ಪಾತಿವ್ರತ್ಯ ಮತ್ತು ಧರ್ಮದ ಮಹಾತ್ಮ್ಯವನ್ನು ತಿಳಿದಿರುವಳು. ಒಂದು ವೇಳೆ ತಾವು ರಣಭೂಮಿಯಲ್ಲಿ ವಿಜಯಹೊಂದಿದರೆ, ನನಗೆ ಅದಕ್ಕಿಂತಲೂ ದೊಡ್ಡ ಸುಖವು ಮತ್ತಾವುದಿದೆ? ಆದರೆ, ನಾನು ತಮಗೆ ವಿಶ್ವಾಸಪೂರ್ವಕ ಹೇಳ ಬಲ್ಲೆನು, ಏನೆಂದರೆ ಎಲ್ಲಿಯಾದರೂ ತಾವು ರಣಕ್ಷೇತ್ರದಲ್ಲಿ ಹೋರಾಡಿ

ದಿವ್ಯಲೋಕಕ್ಕೆ ಪ್ರಯಾಣಮಾಡುವಂತಹ ಸಂಭವದಲ್ಲಿ ನಾನು ಸತಿಯಾಗಿ ಅಗ್ನಿಗೆ ಬಂದಾದರೂ ತಮಗೆ ದಾಂಪತ್ಯ ಸುಖವನ್ನು ಕೊಡುವೆನು. ನನ್ನ ಈ ಹೇಳಿಕೆಯಲ್ಲಿ ತಾವು ಎಷ್ಟನ್ನಾದರೂ ಸಂದೇಹಪಡಬೇಡಿ."

ಸರದಾರನಿಗೆ ಆಗಲೂ ಪೂರ್ಣ ವಿಶ್ವಾಸ ಹುಟ್ಟಿದಂತೆ ತೋರಲಿಲ್ಲ. ತನ್ನ ತರುಣ ಪತ್ನಿಯು ತನ್ನ ಮರಣಾನಂತರ ನಿಜವಾಗಿಯೂ ಸತಿಯಾಗುವಳೇ?—ಅವನು ರಣಭೂಮಿಗೆ ಬೀಳ್ಕೊಳ್ಳುವ ಮೊದಲು ಪುನಃ ಹೇಳಿದನು: "ನೀನು ನನ್ನ ಮರಣಾನಂತರ ನಿನ್ನ ಧರ್ಮವನ್ನು ಮರೆಯಬೇಡ."

ರಾಜಧಾನಿಯಲ್ಲಿ ರಣಭೇರಿ ಮೊಳಗಿತು. ಚೂಂಡಾವತನು ಮತ್ತೊಮ್ಮೆ ತನ್ನ ಒಬ್ಬ ವಿಶ್ವಾಸಪಾತ್ರ ಸೇವಕನೊಡನೆ ಸಂದೇಶ ಕಳುಹಿಸಿದನು. ಏಕೆಂದರೆ, ಅವನಿಗೆ ಸ್ವರ್ಗದಲ್ಲಿ ತಾನು ದಾಂಪತ್ಯಸುಖದಿಂದ ವಂಚಿತನಾಗುವೆನೋ ಎಂಬ ಭಯವಿತ್ತು.

ಹಾಡೀ ರಾಣಿಯು, ತನ್ನ ಪತಿಯು ಈ ಬಗೆಯಾಗಿ ಸಂಶಯಾತ್ಮನಾದುದನ್ನು ಕಂಡು ಇವನೇನಾದರೂ, ತನ್ನ ಕಾರಣದಿಂದಲೇ ಯುದ್ಧದಿಂದ ವಿಮುಖನಾದಾನೇ? ಅಥವಾ ಹೇಡಿಯಂತೆ ಯುದ್ಧಭೂಮಿಯಿಂದ ಪಲಾಯನ ಮಾಡುವನೇ?"—ಎನಿಸಿ, ಚಿಂತಿಸಿದಳು. ಆ ನಾರೀಮಣಿಯು ಕೇವಲ ತನ್ನ ದೇಶದ ಮಾನವನ್ನು ನೆನೆದು ಒಂದು ನಿರ್ಧಾರಕ್ಕೆ ಬಂದಳು. ಆ ಧೀರೆಯು ಶಸ್ತ್ರಶಾಲೆಗೆ ಹೋಗಿ ಒಂದು ಹರಿತವಾದ ಖಡ್ಗವನ್ನು ತೆಗೆದುಕೊಂಡು ಬಂದು, ಆಗ ತಾನೇ ಪತಿಯ ಸಂದೇಶವನ್ನು ತಂದಿದ್ದ ಸೇವಕನ ಎದುರಿಗೆ ನಿಂತು, "ಇದೋ, ಈ ಶಿರವನ್ನು ನಿನ್ನ ಯಜಮಾನರಿಗೆ ಒಪ್ಪಿಸಿ, ರಾಣಿಯು ತನ್ನ ಧರ್ಮವನ್ನು ಪಾಲಿಸುವಳೆಂಬುದನ್ನು ಖಚಿತಪಡಿಸಲು ಇದನ್ನು ಕೊಟ್ಟಳೆಂದು ಹೇಳು. ನಿಶ್ಚಿಂತರಾಗಿ, ಶೌರ್ಯದಿಂದ ಹೋರಾಡುವಂತೆ ಅವರಿಗೆ ಹೇಳು. ಮತ್ತು ನಾನು ದಿವ್ಯಲೋಕಕ್ಕೆ ಹೋಗಿ, ಅಲ್ಲಿ ಅವರ ಆಗಮನವನ್ನು ಎದುರುನೋಡುತ್ತಿರುವೆನೆಂದು ಹೇಳು"—ಎನ್ನುತ್ತ ಕ್ಷಣಮಾತ್ರದಲ್ಲಿ ತನ್ನ ಕುತ್ತಿಗೆಯನ್ನು ಕಡಿದುಕೊಂಡಳು.

ಆ ಸತೀಮಣಿಯ ಪವಿತ್ರ ಶಿರವು ಭೂಮಿಗೆ ಉರುಳುತ್ತಿರಲು, ಸೇವಕನು ಯಂತ್ರದಂತೆ ನಿಂತು ನೋಡುತ್ತಿದ್ದವನು ಯಂತ್ರದಂತೇ ಫಕ್ಕನೆ ಮುಂದುವರಿದು ಅದನ್ನು ತನ್ನ ಕೈಗಳಲ್ಲಿ ಹಿಡಿದುಕೊಂಡನು.

೦ ೦ ೦ ೦

ರಾಣೀ ಹಾಡಿಯ ಶಿರವನ್ನು ನೋಡಿ ಚೂಂಡಾವತನು ಒಂದು ತರದ ರಾಕ್ಷಸೀ ಆನಂದವನ್ನು ತಳೆದಂತೆ ತೋರಿತು. ಆವನು ಹತ್ತಾನೆಗಳ ಬಲವು ಒಮ್ಮಿಂದೊಮ್ಮೆ ತನ್ನಲ್ಲಿ ಬಂದಂತೆ ಅತ್ಯಂತ ವೀರಾವೇಶದಿಂದ ಶತ್ರುಗಳ ನಡುವೆ ನುಗ್ಗಿ ಹೋರಾಡತೊಡಗಿದನು.

ತನ್ನ ಪತ್ನಿಯ ಅಂತರ್ಯವನ್ನು ತಿಳಿಯದ ಚೂಂಡಾವತನು ಆ ಸಾಧ್ವಿಯ ಭಾವೀ ವರ್ತನೆಯ ವಿಷಯವಾಗಿ ಸಂದೇಹ ತಾಳಿದ್ದನು. ಮತ್ತು ಆಕೆಯ ರುಂಡವನ್ನು ನೋಡುತ್ತಲೇ ರಾಕ್ಷಸೀ ಆನಂದವನ್ನು ಹೊಂದಿದ್ದನು. ಇಲ್ಲಿ ನಾವು ಆ ಸಂಶಯಮನೋವೃತ್ತಿಯ ಸರದಾರನ ಅಂತರ್ಯ ಮತ್ತು ವರ್ತನೆಯ ಕುರಿತು ಚರ್ಚಿಸುವುದು ಅವಶ್ಯವಿಲ್ಲ. ವೀರಾಂಗನೆಯ ಅಸಾಧಾರಣ ತ್ಯಾಗವು ನಮ್ಮ ಹೃದಯಗಳನ್ನು ತುಂಬುತ್ತಿದೆ.

---

## ೬. ವೀರಾಂಗನಾ ವೀರಾ

ವೀರಾ ತನ್ನ ಸಾಹಸ ಮತ್ತು ಪರಾಕ್ರಮಕ್ಕಾಗಿ ಪ್ರಸಿದ್ಧಳಾಗಿರುವಳು. ಅವಳು ಮೇವಾಡದ ರಾಜ ಉದಯಸಿಂಹನ ಉಪಪತ್ನಿಯಾಗಿದ್ದಳು. ಅವಳು ಬಹಳ ವೀರತನದಿಂದ ಉದಯಸಿಂಹನ ಪ್ರಾಣ ರಕ್ಷಿಸಿದಳು ಮತ್ತು ಅವನನ್ನು ಅಕ್ಬರನ ಸೆರೆಯಿಂದ ಬಿಡಿಸಿತಂದಳು.

ಅಕ್ಬರನು ಅಧಿಕಾರಸೂತ್ರ ವಹಿಸಿ ಆಗ ಸ್ವಲ್ಪ ಕಾಲಮಾತ್ರವಾಗಿತ್ತು. ಅವನು ಚಿತ್ತೋಡಿನ ಮೇಲೆ ದಾಳಿಯಿಟ್ಟನು. ಉದಯಸಿಂಹನು ಅಕ್ಬರನೊಡನೆ ಹೋರಾಡುವ ಮನಸ್ಸಿಲ್ಲದವನಾಗಿದ್ದನು. ಅವನು ಹೇಡಿಯೂ ಅಂಜುಬುರುಕನೂ ಆಗಿದ್ದನು. ಅವನ ಪುತ್ರ ಮಹಾರಾಣಾ ಪ್ರತಾಪನು ಒಮ್ಮೆ ಹೀಗೆ ಹೇಳಿದ್ದನು: "ರಾಣಾಸಿಂಗ ಮತ್ತು ನನ್ನ ನಡುವೆ ಚಿತ್ತೋಡದಲ್ಲಿ ಬೇರೆ ಯಾವ ರಾಣರೂ ಇದ್ದಿಲ್ಲವಾದರೆ ಅಕಬರನು ಈ ಭೂಮಿಯಲ್ಲಿ ತನ್ನ ಆಧಿಪತ್ಯವನ್ನು ಎಂದೂ ಸ್ಥಾಪಿಸಲು ಸಮರ್ಥನಾಗುತ್ತಿರಲಿಲ್ಲ."

ಯುದ್ಧ ಆರಂಭವಾಯಿತು. ರಾಣನು ದೃಢತೆಯಿಂದ ಕಾದಾಡಲಾರದಾದನು. ಮತ್ತು ಇದರ ಪರಿಣಾಮವೋ? – ಅಕ್ಬರನು ಅವನನ್ನು ಸೆರೆ ಹಿಡಿದನು.

ಈ ಸಮಾಚಾರವು ರಾಜಧಾನಿಗೆ ತಲಪುತ್ತಲೇ ಸರದಾರರು ಮೌನವಾದರು. ಇದನ್ನು ನೋಡುತ್ತಲೇ ಉದಯಸಿಂಹನ ಉಪಪತ್ನಿ ವೀರಾಂಗನಾ ವೀರಾ ಅವಳ ಚರ್ಯೆಯು ಕ್ರೋಧದಿಂದ ಕೆಂಪಡರಿತು. ರಾಣನು ಇವಳನ್ನು ಬಹಳ ಗೌರವಿಸುತಿದ್ದನು.

ರಾಣಿಯು ತನ್ನ ಆಭರಣಗಳನ್ನೆಲ್ಲ ಕಳಚಿ ಕೆಳಗಿಟ್ಟಳು. ಮತ್ತು ರಣಚಂಡಿಯಂತೆ ಕೈಯಲ್ಲಿ ಖಡ್ಗವನ್ನು ತೆಗೆದುಕೊಂಡು, ಯವನರ ಮೇಲೇರಿ ಹೋದಳು.

ಆ ವೀರ ಮಹಿಳೆಯ ರಣಪಟುತ್ವ ಹಾಗು ವೀರತೆ ಮತ್ತು ಸಾಹಸದ ಎದುರು ಅಕಬರನ ಸೈನಿಕರು ಯುದ್ಧಭೂಮಿಯಲ್ಲಿ ನಿಲ್ಲದಾದರು, ಅವರು ಕಾಲುಕಿತ್ತರು. ರಜಪೂತ ಸೈನಿಕರು ರಣಭೂಮಿಯಿಂದ ಪಲಾಯನ ಮಾಡುತಿದ್ದ ಆ ಯವನ ಸೇನೆಯನ್ನು ಬೆನ್ನಟ್ಟಿ ಕೊಂದುಹಾಕತೊಡಗಿದರು.

ಆ ಮೇಲೆ ಆ ವೀರಾಂಗನೆಯು, ತನ್ನ ಪತಿಯನ್ನು ಯವನರ ಸೆರೆಯಿಂದ ವಿಮೋಚನಗೊಳಿಸಿ, ಚಿತ್ತೋಡಕ್ಕೆ ಮರಳಿಬಂದಳು. ಅಕಬರನಿಗೆ, ತಾನು ಹಾಕಿದ ಮುತ್ತಿಗೆಯನ್ನು ತೆಗೆಯಲು ಕೂಡ ದೊಡ್ಡ ಪೇಚಾಟವಾಯಿತು.

ರಾಣಾ ಉದಯಸಿಂಹನು ಅವಳ ವೀರತೆ ಮತ್ತು ಬುದ್ಧಿಕೌಶಲ್ಯವನ್ನು ಪ್ರಶಂಸಿಸಿದನು; ಮತ್ತು ಧಾರಾಳವಾಗಿ ಅವಳನ್ನು ಪಾರಿತೋಷಕಗಳಿಂದ ಭೂಷಿಸಿದನು.

ಇತಿಹಾಸಕಾರ ಟೊಡ್ ಮಹಾಶಯನು ಬರೆದಿರುವನೇನಂದರೆ: “ಕೇವಲ ವೀರಾ ಅವಳ ವೀರತೆಯಿಂದಲೇ ಈ ಬಾರಿ ಚಿತ್ತೋಡವು ಅಕಬರನ ಸ್ವಾಧೀನತೆಗೆ ಹೋಗದೆ ಉಳಿಯಿತು.”

ಉದಯಸಿಂಹನೂ ಆಗಾಗ್ಗೆ ಹೇಳುತಿದ್ದನು: “ವೀರಳಿಂದಲೇ ನಾನು ಬಂಧವಿಮೋಚನೆಯನ್ನು ಹೊಂದಿದೆನು!”

ಸರದಾರರು ಈ ಮಾತುಗಳನ್ನು ಕೇಳಿ, ಲಜ್ಜೆಯಿಂದ ತಲೆಬಾಗುತಿದ್ದರು. ಅವರ ಮತ್ಸರವು ಬೆಳೆಯತೊಡಗಿತು. ಕೊನೆಗೆ ಅವರು ಸರ್ವಯತ್ನದಿಂದ ವೀರಳನ್ನು ಕೊಲ್ಲಿಸಿದರು. ವೀರಾ, ತನ್ನ ಪತಿಗಾಗಿ ನಗುತ್ತ ನಗುತ್ತ ಪ್ರಾಣತ್ಯಾಗಮಾಡಿದಳು.

---

## ೭. ಜವಾಹರ ಬಾಯಿ

ಹದಿನಾರನೇ ಶತಮಾನದ ಪೂರ್ವಾರ್ಧದ ಹಿಂದೂಸ್ಥಾನವು ಅನೇಕ ಮಹತ್ವದ ಘಟನೆಗಳಿಗೆ ಪ್ರಸಿದ್ಧವಾದುದು. ಪಠಾಣರೂ ಮೊಗಲರೂ ಭಾರತದ ಮೇಲೆ ತಮ್ಮ ಪೂರ್ಣ ಪ್ರಭುತ್ವ ಸ್ಥಾಪಿಸಲು ಹವಣಿಸಿದ್ದರು. ರಜಪೂತರಲ್ಲಿಯೂ ಕೂಡ ರಾಣಾ ಸಂಗ್ರಾಮಸಿಂಹನು ಉತ್ಸಾಹವನ್ನೂ ವೀರತೆಯನ್ನೂ ತುಂಬಿದ್ದನು. ದೇಶದಿಂದ ಮೊಗಲರನ್ನೋಡಿಸಿ, ಹಿಮಾಲಯದಿಂದ ಕನ್ಯಾಕುಮಾರಿಯ ವರೆಗೆ—ಅಟಕದಿಂದ ಕಟಕ್ ವರೆಗೆ ಹಿಂದೂ ರಾಜ್ಯ ಸ್ಥಾಪಿಸಬೇಕೆಂದು ರಜಪೂತರೂ ಇಚ್ಛಿಸಿದ್ದರು. ಷೇರ್ ಷಹನು ಬಾದಶಹನಾಗುವ ಸ್ವಪ್ನವನ್ನು ಕಾಣುತ್ತಿದ್ದನು. ಹುಮಾಯೂನನು ಬಾಬರನ ವೀರತೆಯನ್ನು ಮತ್ತು ಸಮ್ಮಾನವನ್ನು ಸ್ಥಿರವಾಗಿರಿಸಲು ಯತ್ನಶೀಲನಾಗಿದ್ದನು. ಮೇವಾಡದ ಕುಲಸೂರ್ಯ ಸಂಗ್ರಾಮಸಿಂಹನ ಮರಣಾನಂತರ ಚಿತ್ತೋಡದ ಸಿಂಹಾಸನದ ಮೇಲೆ ಅವನ ಪುತ್ರನಾದ ವಿಕ್ರಮಾದಿತ್ಯನು ಕುಳಿತನು. ಅವನು ವಿಲಾಸಪ್ರಿಯನೂ ಹೇಡಿಯೂ ಆಗಿದ್ದನು. ಗುಜರಾಥ ಮತ್ತು ಮಾಳವದ ಪಠಾಣ ಶಾಸಕರು ವಿಕ್ರಮಾದಿತ್ಯನ ಶಕ್ತಿಹೀನತೆ ಮತ್ತು ಅವಿಚಾರದ ಲಾಭಮಾಡಿಕೊಂಡು ಚಿತ್ತೋಡದ ಮೇಲೆ ಆಕ್ರಮಣಮಾಡಿದರು. ರಾಜನು ಸೋತು ಪಲಾಯನಮಾಡಿದನು. ಮುಸಲ್ಮಾನರು ನಗರದೊಳಗೆ ನುಗ್ಗತೊಡಗಿದರು. ರಜಪೂತ ಸ್ತ್ರೀಯರು ಆತ್ಮಸಮರ್ಪಣೆ ಮಾಡುತಿದ್ದರು. ಪುರುಷರು ರಣಭೂಮಿಯಲ್ಲಿ ಮಡಿದು ರಾಜ್ಯವು ಯವನರ ವಶವಾಗುವ ದುಸ್ಸಮಯದಲ್ಲಿ ಅವರು ದೊಡ್ಡ ಬೆಂಕಿಯನ್ನುರಿಸಿ ಆದರೊಳಗೆ ಹಾರಿ ಪ್ರಾಣತ್ಯಾಗಮಾಡುತಿದ್ದರು. ಅದಕ್ಕೆ 'ಜೋಹರ್' ಎನ್ನುತ್ತಾರೆ.

ವಿಕ್ರಮಾದಿತ್ಯ ರಾಜನ ರಾಣಿ ಜವಾಹರಬಾಯಿಯು ರಜಪೂತ ಸ್ತ್ರೀಯರನ್ನುದ್ದೇಶಿಸಿ ಹೇಳಿದಳೇನೆಂದರೆ: "ಜೋಹರ್ ಮಾಡುವುದರಿಂದ ನಾರೀಧರ್ಮದ ಪಾಲನೆಯು ಅವಶ್ಯವಾಗಿ ಆಗುತ್ತದೆ: ಆದರೆ, ಅದರಿಂದ ದೇಶರಕ್ಷಣೆ ಮಾಡಿದಂತಾಗುವುದಿಲ್ಲ. ಸಾಯುವುದೇನೋ ನಿಜ. ಆದುದರಿಂದ ವಿಧರ್ಮಿಯರನ್ನು ಹೊಡೆದೇ ಮರಣಹೊಂದುವುದು ಇನ್ನೂ ಉತ್ತಮ. ಕೈಗಳಲ್ಲಿ ಖಡ್ಗಗಳನ್ನು ಹಿಡಿದು ಶತ್ರುಗಳಿಗೆ ನಮ್ಮ ತೇಜಸ್ವಿತೆ ಮತ್ತು ವೀರತ್ವದ ಪರಿಚಯಮಾಡಿಕೊಡಬೇಕು."

ಕ್ಷತ್ರಿಣಿಯರು ವೀರತಾಪೂರ್ಣ ವಕ್ರತೆಯನ್ನಾಲಿಸಿ ಹೂಂಕಾರಮಾಡಿದರು. ಅವರ ಗಗನಭೇದಿ ಸಿಂಹನಾದದಿಂದ ಯವನರ ಹೃದಯಗಳು ದಹಿಸತೊಡಗಿದುವು. ಅಸ್ತ್ರಶಸ್ತ್ರಗಳಿಂದ ಸುಸಜ್ಜಿತರಾದ ಅಸಂಖ್ಯಾತ ವೀರಾಂಗನೆಯರು ಅಶ್ವಗಳನ್ನೇರಿ ಅರಮನೆಯಿಂದ ಹೊರಹೊರಟರು. ಮುಂದಾಗಿ ರಜಪೂತಾನಿ ಜವಾಹರಬಾಯಿಯೇ ನಡೆದಿದ್ದಳು. ಈ ಸ್ತ್ರೀಯರು ಒಟ್ಟುಗೂಡಿ ಪಠಾಣರೊಡನೆ ಯುದ್ಧಮಾಡಿದರು. ರಕ್ತದ ಕಾಲುವೆಯೇ ಹರಿಯಿತು. ಆತತಾಯಿ ಮತ್ತು ವಿಧರ್ಮಿಯರ ರೆಕ್ಕೆಗಳು ಮುರಿದುಹೋದುವು. "ಹರಹರ ಮಹಾದೇವ" ಎಂದು ಗರ್ಜಿಸುತ್ತ, ಕೊನೆಗೆ ಅಸಂಖ್ಯ ವೀರವಧುಗಳು ಸ್ವರ್ಗಯಾತ್ರೆ ಮಾಡಿದರು. ವೀರಾಂಗನಾ ಜವಾಹರಬಾಯಿಯು ಯುದ್ಧಮಾಡುತ್ತ ವೀರಸ್ವರ್ಗವನ್ನು ಸೇರಿದಳು.

ಪಠಾಣರು ವಿಜಯಿಗಳಾದರೂ ಅದು ಅವರ ಸೋಲಾಗಿತ್ತು. ಸ್ತ್ರೀಯರ ಮೇಲೆ ಹೇಡಿತನದಿಂದ ಖಡ್ಗವನ್ನೆತ್ತಿ ವಿಜಯಿಗಳೆನಿಸುವುದು ವೀರರಿಗೆ ಎಂದೂ ಸಲ್ಲದು. ಸತೀ ಸಾಧ್ವೀ ಜವಾಹರಬಾಯಿಯ ವೀರಗೀತವು ಮೇವಾಡ ಮತ್ತು ಹಿಂದೂಸ್ಥಾನದ ಇತಿಹಾಸದಲ್ಲಿ ಪ್ರಸಿದ್ಧವಾಗಿದೆ.



Edited, Printed & Published by K. V. Shenoy
at the Prabhat Printers, Ltd., Mangalore.